ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 624
ಸದಸ್ಯರ ಹೆಸರು : ಮಾನೆ ಶ್ರೀನಿವಾಸ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ: : 24.09.2020
ಉತ್ತರಿಸುವವರು : ಸನ್ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2019 ಹಾಗೂ 2020ನೇ ಸಾಲಿನಲ್ಲಿ ರಾಜ್ಯದಲ್ಲಿ ಉಂಟಾದ ಭೀಕರ ನೆರೆಹಾವಳಿಗೆ ಕೇಂದ್ರದ ಎನ್.ಡಿ.ಆರ್.ಎಫ್. ದಿಂದ ಬಂದ ಅನುದಾನವೆಷ್ಟು; | 2019–20ನೇ ಸಾಲಿನಲ್ಲಿ ನೆರೆಹಾವಳಿ ಪರಿಹಾರಕ್ಕಾಗಿ ಕೇಂದ್ರ ಸರ್ಕಾರದ ಎನ್.ಡಿ.ಆರ್.ಎಫ್.ನಿಂದ ಒಟ್ಟು ರೂ.2905.28ಕೋಟಿಗಳ ಅನುದಾನ ರಾಜ್ಯ ಸರ್ಕಾರಕ್ಕೆ ಬಂದಿರುತ್ತದೆ.<br>2020–21ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಎನ್.ಡಿ.ಆರ್.ಎಫ್.ನಿಂದ ರಾಜ್ಯ ಸರ್ಕಾರಕ್ಕೆ ಯಾವುದೇ ಅನುದಾನ ಬಂದಿರುವುದಿಲ್ಲ. |
| ಆ) | ರಾಜ್ಯದಲ್ಲಿ ಉಂಟಾಗಿರುವ ವ್ಯಾಪಕ ಕೊರೊನಾ ಹಾವಳಿ ತಡೆಗಟ್ಟುವ ನಿಟ್ಟಿನಲ್ಲಿ ರಾಜ್ಯಕ್ಕೆ ಕೇಂದ್ರದಿಂದ ಬಂದ ಅನುದಾನವೆಷ್ಟು? | ಕೇಂದ್ರ ಸರ್ಕಾರದ ಎಸ್.ಡಿ.ಆರ್.ಎಫ್.ನಿಂದ ಕೊರೊನಾ ಹಾವಳಿ ತಡೆಗಟ್ಟುವುದೂ ಸೇರಿದಂತೆ ಪರಿಹಾರ ಕಾರ್ಯಗಳಿಗಾಗಿ ರಾಜ್ಯ ಸರ್ಕಾರಕ್ಕೆ 2020–21ನೇ ಸಾಲಿಗೆ ಒಟ್ಟು ರೂ.791.00 ಕೋಟಿಗಳ ಅನುದಾನ ಬಿಡುಗಡೆಯಾಗಿದ್ದು, ಇದನ್ನು ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)ಗೆ ಬಿಡುಗಡೆಗೊಳಿಸಲಾಗಿದೆ.<br>2020–21ನೇ ಸಾಲಿನಲ್ಲಿ ರಾಷ್ಟ್ರೀಯ ಆರೋಗ್ಯ ಅಭಿಯಾನ(National Health Mission) ಅಡಿಯಲ್ಲಿ ಕೇಂದ್ರ ಸರ್ಕಾರದಿಂದ ಬಿಡುಗಡೆ ಮಾಡಲಾದ ಒಟ್ಟು ರೂ.281.10 ಕೋಟಿಗಳನ್ನು ಕೊರೊನಾ ಹಾವಳಿ ತಡೆಗಟ್ಟಲು ಬಿಡುಗಡೆ ಮಾಡಲಾಗಿದೆ. |

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ